ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ರಾಜ್ಯದ ವಿಶ್ವವಿದ್ಯಾಲಯಗಳ ಬೋಧಕ/ಬೋಧಕೇತರರ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)

385 (560) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಮಂಜೂರಾದ ಶಿಕ್ಷಕರ ಹುದ್ದೆಗಳೆಷ್ಟು ; ಅವುಗಳಲ್ಲಿ ಎಷ್ಟು ಖಾಲಿ ಇವೆ ; (ವಿಶ್ವವಿದ್ಯಾಲಯವಾರು ಮಾಹಿತಿ ನೀಡುವುದು)

(ಆ) ಸದರಿ ವಿಶ್ವವಿದ್ಯಾಲಯಗಳಲ್ಲಿ ಅತಿಥಿ ಉಪನ್ಯಾಸಕರು ಎಷ್ಟು ಜನ ಇದ್ದಾರೆ ; ಅವರು ಎಷ್ಟು ವರ್ಷ/ದಿನಗಳಿಂದ ಕೆಲಸ ಮಾಡುತ್ತಿದ್ದಾರೆ ; (ವಿಶ್ವವಿದ್ಯಾಲಯವಾರು ಮಾಹಿತಿ ನೀಡುವುದು)

(ಇ) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಮಂಜೂರಾದ ಬೋಧಕೇತರ ಹುದ್ದೆಗಳೆಷ್ಟು ; ಅದರಲ್ಲಿ ಖಾಲಿ ಹುದ್ದೆಗಳೆಷ್ಟು ; (ವಿಶ್ವವಿದ್ಯಾಲಯವಾರು ಮಾಹಿತ ನೀಡುವುದು)

(ಈ) ಈ ರೀತಿ ಬೋಧಕ/ಬೋಧಕೇತರ ಸಿಬ್ಬಂದಿ ಇಲ್ಲದೇ ವಿಶ್ವವಿದ್ಯಾಲಯಗಳು ನಡೆಯುವುದಾದರೂ ಹೇಗೆ ; (ವಿವರ ನೀಡುವುದು)

(ಉ) ತಕ್ಷಣ ಈ ಹುದ್ದೆಗಳನ್ನು ತುಂಬಲು ಸರ್ಕಾರ ಕ್ರಮ ಕೈಗೊಳ್ಳುವುದೇ?